# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 546
ಸದಸ್ಯರ ಹೆಸರು : ಶ್ರೀ ಕೆ. ಹರೀಶ್ ಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು).
ಉತ್ತರಿಸುವ ದಿನಾಂಕ : 05-02-2021.
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಗ್ರೇಡ್-1 ಪಂಚಾಯತ್ ಕಾರ್ಯದರ್ಶಿಗಳ ಸಂಖ್ಯೆ ಎಷ್ಟು; | ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮ ಪಂಚಾಯತಿಗಳಿಗೆ ಗ್ರೇಡ್-1 ಗ್ರಾಮ ಪಂಚಾಯತಿ ಕಾರ್ಯದರ್ಶಿ ವೃಂದದಲ್ಲಿ ಮಂಜೂರಾದ ಹುದ್ದೆಗಳು, ಕರ್ತವ್ಯ ನಿರ್ವಹಿಸುತ್ತಿರುವವರು ಮತ್ತು ಖಾಲಿ ಹುದ್ದೆಗಳ ವಿವರ ಈ ಕೆಳಕಂಡಂತಿದೆ. (ಕೆಳಗಿನ ಕೋಷ್ಟಕ) |
| (ಆ) | ಗ್ರೇಡ್-1 ಪಂಚಾಯಿತಿ ಕಾರ್ಯದರ್ಶಿಗಳಿಗೆ ಬಡ್ತಿ ಆದೇಶಗಳಿದ್ದರೂ, ಬಡ್ತಿ ಕೊಡದಿರಲು ಕಾರಣವೇನು; ಬಡ್ತಿ ಹೊಂದಲು ಖಾಲಿ ಇರುವ ಹುದ್ದೆಗಳೆಷ್ಟು; | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ದಿನಾಂಕ 05.06.2018ರಂದು ಅರ್ಹ ಎಲ್ಲಾ 23 ಗ್ರೇಡ್-1 ಗ್ರಾಮ ಪಂಚಾಯತ್ ಕಾರ್ಯದರ್ಶಿಗಳಿಗೆ ಪಂಚಾಯತ್ ಅಭಿವೃದ್ಧಿ ಅಧಿಕಾರಿ ಹುದ್ದೆಗೆ ಬಡ್ತಿ ನೀಡಲಾಗಿದೆ. ತದನಂತರ ಅರ್ಹ ಗ್ರೇಡ್-1 ಗ್ರಾಮ ಪಂಚಾಯತಿ ಕಾರ್ಯದರ್ಶಿಗಳು ಲಭ್ಯವಿಲ್ಲದ ಕಾರಣ ಬಡ್ತಿ ನೀಡಲು ಸಾಧ್ಯವಾಗಿಲ್ಲ.<br><br>ಗ್ರೇಡ್-1 ಗ್ರಾಮ ಪಂಚಾಯತ್ ಕಾರ್ಯದರ್ಶಿಗಳಿಗೆ ಬಡ್ತಿ ನೀಡಲು ಪಂಚಾಯತ್ ಅಭಿವೃದ್ಧಿ ಅಧಿಕಾರಿ ಹುದ್ದೆಯ ಮುಂಬಡ್ತಿ ಕೋಟಾದಲ್ಲಿ ಪ್ರಸ್ತುತ ಖಾಲಿ ಇರುವ ಹುದ್ದೆಗಳ ಸಂಖ್ಯೆ 16.<br><br>ಪ್ರಸ್ತುತ ಅರ್ಹ ಗ್ರೇಡ್-1 ಗ್ರಾಮ ಪಂಚಾಯತಿ ಕಾರ್ಯದರ್ಶಿಗಳಿಗೆ ಜೇಷ್ಠತೆ ಮತ್ತು ಅರ್ಹತೆ ಆಧಾರದ ಮೇಲೆ ಬಡ್ತಿ ನೀಡಲು ಕ್ರಮ ಕೈಗೊಳ್ಳಲಾಗುವುದು. |
| (ಇ) | ಎಷ್ಟು ಮಂದಿ ಗ್ರೇಡ್-2 ಕಾರ್ಯದರ್ಶಿಗಳಿಗೆ ಪಂಚಾಯಿತಿ ಅಭಿವೃದ್ಧಿ ಅಧಿಕಾರಿ (ಪ್ರಭಾರ) ಚಾರ್ಜ್ ನೀಡಲಾಗಿದೆ; | ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಗ್ರೇಡ್-2 ಗ್ರಾಮ ಪಂಚಾಯತಿ ಕಾರ್ಯದರ್ಶಿಗಳಿಗೆ ಪಂಚಾಯತ್ ಅಭಿವೃದ್ಧಿ ಅಧಿಕಾರಿ ಪ್ರಭಾರ ನೀಡಿರುವುದಿಲ್ಲ. |
| (ಈ) | ಗ್ರೇಡ್-1 ಪಂಚಾಯಿತಿ ಕಾರ್ಯದರ್ಶಿಗಳಿಗೆ ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳಾಗಿ (ಪ್ರಭಾರ) ಚಾರ್ಜ್ ನೀಡದಿರಲು ಕಾರಣವೇನು? | ಪಂಚಾಯತಿ ಅಭಿವೃದ್ಧಿ ಅಧಿಕಾರಿ ಹುದ್ದೆ ಖಾಲಿ ಇರುವ ಗ್ರಾಮ ಪಂಚಾಯತಿಗಳಿಗೆ ಲಭ್ಯತೆಗೆ ಅನುಗುಣವಾಗಿ ಗ್ರೇಡ್-1 ಗ್ರಾಮ ಪಂಚಾಯತಿ ಕಾರ್ಯದರ್ಶಿಗಳಿಗೆ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳಾಗಿ ಪ್ರಭಾರ ನೀಡಲಾಗಿರುತ್ತದೆ. |

| ಮಂಜೂರಾದ ಹುದ್ದೆಗಳು | | ಕರ್ತವ್ಯ ನಿರ್ವಹಿಸುತ್ತಿರುವವರು | | ಖಾಲಿ ಇರುವ ಹುದ್ದೆಗಳು | |
|---|---|---|---|---|---|
| ನೇರ | ಮುಂಬಡ್ತಿ | ನೇರ | ಮುಂಬಡ್ತಿ | ನೇರ | ಮುಂಬಡ್ತಿ |
| 33 | 34 | 31 | 31 | 2 | 3 |

ಸಂ. ಗ್ರಾಅಪ 55 ಗ್ರಾಪಂಅ 2021

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು